# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1146 |
| ವಿಧಾನ ಪರಿಷತ್ ಸದಸ್ಯರ ಹೆಸರು | ಶ್ರೀ.ಐವನ್ ಡಿ ಸೋಜಾ |
| ಉತ್ತರಿಸುವವರು | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |
| ಉತ್ತರಿಸಬೇಕಾದ ದಿನಾಂಕ | 20.12.2018 |

<table>
<tr><th>ಕ್ರ.ಸ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆಯರಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಒಟ್ಟು ಸಂಭಾವನೆ ಎಷ್ಟು; ಕಾರ್ಯ ನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯ ಕರ್ತೆಯರೆಷ್ಟು (ವಿವರ ಒದಗಿಸುವುದು); ಕಾರ್ಯಕರ್ತೆಯರ ಗೌರವಧನ ಬಾಕಿ ಇರುವುದರ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು;</td><td>ರಾಜ್ಯದ ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಒಟ್ಟು ಗೌರವಧನ ಈ ಕೆಳಕಂಡಂತೆ ಪಾವತಿಸಲಾಗುತ್ತಿದೆ;
<table>
<tr><th>ಕ್ರ.ಸ</th><th>ವಿವರ</th><th>ಕೇಂದ್ರ ಸರ್ಕಾರ (60:40)</th><th>ರಾಜ್ಯ ಸರ್ಕಾರ (0:100)</th><th>ಒಟ್ಟು</th></tr>
<tr><td>1</td><td>ಅಂಗನವಾಡಿ ಕಾರ್ಯಕರ್ತೆಯರು</td><td>3000/-</td><td>5000/-</td><td>8000/-</td></tr>
<tr><td>2</td><td>ಮಿನಿ ಅಂಗನವಾಡಿ ಕೇಂದ್ರದ ಕಾರ್ಯ ಕರ್ತೆಯರು ಯರು</td><td>2250/-</td><td>2500/-</td><td>4750/-</td></tr>
<tr><td>3</td><td>ಅಂಗನವಾಡಿ ಸಹಾಯಕಿಯರು</td><td>1500/-</td><td>2500/-</td><td>4000/-</td></tr>
</table>
<br>ಕೇಂದ್ರ ಸರ್ಕಾರವು ಅಕ್ಟೋಬರ್ 2018 ರಿಂದ ಜಾರಿಗೆ ಬರುವಂತೆ ಅಂಗನವಾಡಿ ಕಾರ್ಯಕರ್ತೆಯರಿಗೆ ರೂ.1500/- ಮಿನಿ ಅಂಗನವಾಡಿ ಕೇಂದ್ರದ ಕಾರ್ಯಕರ್ತೆಯರಿಗೆ ರೂ.1250/- ಹಾಗೂ ಸಹಾಯಕಿಯರಿಗೆ ರೂ.750/- ರಂತೆ ಮಾಹೆಯಾನ ಗೌರವಧನ ಹೆಚ್ಚಿಸಿದೆ.
<br><br>ಪ್ರಸ್ತುತ ರಾಜ್ಯದಲ್ಲಿ ಒಟ್ಟು 61025 ಅಂಗನವಾಡಿ ಕಾರ್ಯಕರ್ತೆಯರು ಹಾಗೂ 3331 ಮಿನಿ ಅಂಗನವಾಡಿ ಕೇಂದ್ರಗಳ ಕಾರ್ಯಕರ್ತೆಯರು ಕಾರ್ಯ ನಿರ್ವಹಿಸುತ್ತಿದ್ದಾರೆ.
<br><br>ಕಾರ್ಯಕರ್ತೆಯರ ಬಾಕಿ ಗೌರವಧನ ಪಾವತಿಸಲು ತಾಲ್ಲೂಕು ಪಂಚಾಯಿತಿ ನಿಧಿ-1 ರಲ್ಲಿ ಉಳಿಕೆ ಇರುವ ರೂ.172.53 ಕೋಟಿ ಅನುದಾನವನ್ನು ಮರು ಮೌಲ್ಯೀಕರಿಸಿದೆ ಹಾಗೂ ಹೆಚ್ಚುವರಿಯಾಗಿ ರೂ.118.05 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.</td></tr>
</table>

<table>
<tr><td>ಆ.</td><td>ಬಹುತೇಕ ಅಂಗನವಾಡಿಗಳು ಕಟ್ಟಡಗಳಿಲ್ಲದೇ ದೇವಸ್ಥಾನ, ಸಭಾಭವನ ಹಾಗೂ ಬಯಲುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಹೌದು.<br>ಬಯಲುಗಳಲ್ಲಿ ಯಾವುದೇ ಅಂಗನವಾಡಿ ಕೇಂದ್ರವು ಕಾರ್ಯನಿರ್ವಹಿಸುತ್ತಿರುವುದಿಲ್ಲ.</td></tr>
<tr><td>ಇ</td><td>ಶೌಚಾಲಯಗಳಿಲ್ಲದೇ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿಗಳ ಸಂಖ್ಯೆ ಎಷ್ಟು? (ವಿವರ ನೀಡುವುದು)</td><td>ರಾಜ್ಯದಲ್ಲಿ 65911 ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಈ ಪೈಕಿ 43328 ಅಂಗನವಾಡಿ ಕೇಂದ್ರಗಳು ಸ್ವಂತ ಕಟ್ಟಡಗಳಲ್ಲಿ ಮತ್ತು 22583 ಕೇಂದ್ರಗಳು ಬಾಡಿಗೆಯನ್ನು ಒಳಗೊಂಡದಂತೆ ಇತರೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಶೌಚಾಲಯಗಳಿಲ್ಲದೇ ಇರುವ ಕೇಂದ್ರಗಳ ವಿವರ ಕೆಳಕಂಡಂತಿದೆ.
<table>
<tr><td></td><td>ಶೌಚಾಲಯ ಇರುವುದು</td><td>ಶೌಚಾಲಯ ಇಲ್ಲದಿರುವುದು.</td><td>ಒಟ್ಟು</td></tr>
<tr><td>ಸ್ವಂತ ಕಟ್ಟಡ</td><td>33753</td><td>9575</td><td>43328</td></tr>
<tr><td>ಇತರೆ ಕಟ್ಟಡ</td><td>7961</td><td>14622</td><td>22583</td></tr>
<tr><td>ಒಟ್ಟು</td><td>41714</td><td>24197</td><td>65911</td></tr>
</table></td></tr>
</table>

ಸಂ:ಮಮಇ 360 ಐಸಿಡಿ 2018

(ಡಾ. ಜಯಮಾಲ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಹಾಗೂ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವರು.